# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ.ಬಸವರಾಜ ಪಾಟೀಲ್ ಇಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 900 (1119) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಪಟ್ಟಣಕ್ಕೆ 24x7 ಕುಡಿಯುವ ನೀರಿನ ಕಾಮಗಾರಿ ಯಾವಾಗ ಪ್ರಾರಂಭಿಸಲಾಗಿದೆ; | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮ (ಎನ್‌ಕೆಯುಎಸ್‌ಐಪಿ) ದಡಿಯಲ್ಲಿ ರಾಯಚೂರು ನಗರಕ್ಕೆ 24x7 ಕುಡಿಯುವ ನೀರು ಸರಬರಾಜು ಯೋಜನೆಯನ್ನು ರೂ.79.93 ಕೋಟಿಗೆ ಮೆ//ಎಸ್‌ಪಿಎಂಎಲ್ ಇಫ್ರಾ ಲಿ, ರವರಿಗೆ ದಿನಾಂಕ 28.02.2015 ರಂದು ಗುತ್ತಿಗೆ ವಹಿಸಲಾಗಿದ್ದು, ಅಂದೇ ಕಾಮಗಾರಿಯನ್ನು ಪ್ರಾರಂಭಿಸಲಾಗಿದೆ. |
| ಆ) | ಕುಡಿಯುವ ನೀರಿನ ಕಾಮಗಾರಿ ಸ್ಥಗಿತಗೊಂಡಿದ್ದು, ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕೈಗೊಂಡ ಕ್ರಮವೇನು; ಕಾಮಗಾರಿ ಪೂರ್ತಿಗೊಳ್ಳದಿರಲು ಕಾರಣವೇನು; | ರಾಯಚೂರು ನಗರದಲ್ಲಿ ಕುಡಿಯುವ ನೀರಿನ ಕಾಮಗಾರಿ ಸ್ಥಗಿತಗೊಂಡಿರುವುದಿಲ್ಲ. ಆದರೆ, ಮಂದಾಗತಿಯಲ್ಲಿ ಪ್ರಗತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ಗುತ್ತಿಗೆದಾರರು ನಿಗಧಿತ ಅವದಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸದ ಕಾರಣ, ಕರಾರಿನ ನಿಯಮಾನುಸಾರ ಗುತ್ತಿಗೆದಾರರಿಗೆ ದಂಡ ವಿಧಿಸಲಾಗಿದೆ ಹಾಗೂ ನೋಟೀಸ್ ಜಾರಿಗೊಳಿಸಲಾಗುತ್ತಿದೆ.<br><br>ಈ ಕೆಳಕಂಡ ಮುಖ್ಯ ಕಾರಣಗಳಿಂದ ಕಾಮಗಾರಿ ಪೂರ್ತಿಗೊಳ್ಳಲು ವಿಳಂಬವಾಗಿರುತ್ತದೆ.<br>• ಸಮಾಲೋಚಕರ ವಿನ್ಯಾಸವನ್ನು ಅಂತಿಮ ಗೊಳಿಸುವಾಗ ಅಮೃತ್ ಯೋಜನೆಯ ವಿನ್ಯಾಸದೊಂದಿಗೆ ಸಂಯೋಜಿಸಿ ವಿನ್ಯಾಸಿಸಿಕೊಡಲು ವಿಳಂಬಗೊಂಡಿರುತ್ತದೆ. ಇದರಿಂದ BOQ ನಲ್ಲಿರುವ ವಿತರಣಾ ಜಾಲದ ಕೊಳವೆಯ ಗಾತ್ರಗಳಲ್ಲಿ ವ್ಯತ್ಯಾಸ ಉಂಟಾಗಿ BOQ ಅಂಶಗಳಲ್ಲಿ ವೇರಿಯೇಷನ್ ತಯಾರಿಸಿ ಅನುಮೋದಿಸಿವುದು ವಿಳಂಬವಾಗಿರುತ್ತದೆ.<br>• ಗುತ್ತಿಗೆದಾರರು ಯೋಜನೆಗೆ ಅವಶ್ಯವಾದ ಸಂಪನ್ಮೂಲ ಗಳನ್ನು ಕ್ರೂಡೀಕರಿಸುವಲ್ಲಿ ವಿಫಲ ವಾಗಿರುವುದರಿಂದ ಅನುಷ್ಠಾನದಲ್ಲಿ ವಿಳಂಬವಾಗಿದೆ.<br>• ಈ ಮಧ್ಯೆ ಗುತ್ತಿಗೆದಾರರು ಗುತ್ತಿಗೆ ಚಾಲ್ತಿಯಲ್ಲಿರು ವಾಗಲೇ ಕಾಮಗಾರಿಯನ್ನು ಸ್ಥಗಿತಗೊಳಿಸಿ ತಕರಾರು ತೆಗೆದು ಹೆಚ್ಚುವರಿ ದರ ಮತ್ತು ದಂಡ ವಿನಾಯಿತಿ ಕೋರಿ Arbitrator ಅನ್ನು ನೇಮಿಸಲು ಉಚ್ಚ ನ್ಯಾಯಾಲಯದಲ್ಲಿ ಮೊರೆ ಹೋಗಿ ಅದರಂತೆ ಕಾಮಗಾರಿ ಸಂಪೂರ್ಣಗೊಳಿಸುವ ಹಿತದೃಷ್ಟಿಯಿಂದ ಕಾನೂನಿನಂತೆ ಸಮಾಲೋಚಿಸಿ ಅದರಂತೆ ಕಾಮಗಾರಿ ಸಂಪೂರ್ಣಗೊಳಿಸುವ ಹಿತದೃಷ್ಟಿಯಿಂದ ಕಾನೂನಿನಂತೆ |

| | | |
|---|---|---|
| | | ಸಮಾಲೋಚಿಸಿ ಸೌಹಾರ್ದಯುತ ಒಪ್ಪಂದ ಕರಾರನ್ನು ದಿನಾಂಕ 12.03.2020 ರಂದು ಮಾಡಿಕೊಳ್ಳಲಾಯಿತು. ನಂತರ ಕಾಮಗಾರಿ ಪ್ರಾರಂಭಿಸಲಾಯಿತು.<br>• ಮಾರ್ಚ್ 2020 ರಿಂದ ಕೋವಿಡ್-19 ಪಿಡುಗು ಬಂದ ಕಾರಣ ಲಾಕ್ ಡೌನ್ ಘೋಷಣೆಯಾದ ನಿಮ್ಮಿತ್ತ ಕೂಲಿ ಕಾರ್ಮಿಕರ ಅಭಾವದಿಂದ ಕಾಮಗಾರಿ ಕುಂಠಿತಗೊಂಡಿರುತ್ತದೆ. |
| ಇ) | ಅಮೃತ ಯೋಜನೆಯಲ್ಲಿ ಎಷ್ಟು ಕಾಮಗಾರಿಗಳು ಮಂಜೂರಾಗಿವೆ; | ಅಮ್ಮೃತ್ ಯೋಜನೆಯಲ್ಲಿ ರಾಯಚೂರು ನಗರಕ್ಕೆ ಒಂದು ಕುಡಿಯುವ ನೀರಿನ ಕಾಮಗಾರಿಯು ಮಂಜೂರಾಗಿರುತ್ತದೆ. |
| ಈ) | ಅಮೃತ ಈ ಯೋಜನೆ ಯಾವ ಹಂತದಲ್ಲಿದೆ? (ವಿವರ ನೀಡುವುದು) | ಅಮ್ಮೃತ ಯೋಜನೆಯಡಿ, ರಾಯಚೂರು ನಗರದ ಹಾಲಿ ಇರುವ ನೀರು ಸರಬರಾಜು ಯೋಜನೆಯನ್ನು ಅಭಿವೃದ್ಧಿ ಪಡಿಸಲು ರೂ.57.00 ಕೋಟಿಗಳ ಅಂದಾಜಿನಲ್ಲಿ 01 ಯೋಜನೆಯು ಮಂಜೂರಾಗಿದ್ದು, ಸದರಿ ಯೋಜನೆಯಲ್ಲಿ ಈ ಕೆಳಗಿನ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು, ಕಾಮಗಾರಿಗಳ ಪ್ರಗತಿಯ ವಿವರಗಳು ಈ ಕೆಳಗಿನಂತಿವೆ. |

| ಕ್ರ. ಸಂ | ಕಾಮಗಾರಿ | ಪ್ರಗತಿ | ಷರಾ |
|---|---|---|---|
| 1 | ಚಿಕ್ಕಸುಗೂರುನಲ್ಲಿರುವ 30 ಎಂ.ಎಲ್.ಡಿ. ಜಲ ಶುದ್ಧೀಕರಣ ಘಟಕದ ಆವರಣ ದಲ್ಲಿ ಹೆಚ್ಚುವರಿ ಯಾಗಿ 10 ಎಂ,ಎಲ್.ಡಿ. ಸಾಮರ್ಥ್ಯದ ಜಲ ಶುದ್ಧೀಕರಣ ಘಟಕದ ನಿರ್ಮಾಣ ಕಾಮಗಾರಿ. | ಕಾಮಗಾರಿ ಪೂರ್ಣಗೊಂಡಿದೆ. | |
| 2 | ಚಿಕ್ಕಸುಗೂರುನಲ್ಲಿರುವ ಹಾಲಿ 30 ಎಂ.ಎಲ್.ಡಿ. ಸಾಮರ್ಥ್ಯದ ಜಲ ಶುದ್ಧೀಕರಣ ಘಟಕದ ಪುನಃಶ್ಚೇತನ ಕಾಮಗಾರಿ. | ಕಾಮಗಾರಿ ಪೂರ್ಣಗೊಂಡಿದೆ. | |
| 3 | ಮಧ್ಯಂತರ ಯಂತ್ರಾಗಾರದಲ್ಲಿ ಯಂತ್ರೋಪಕರಣಗಳ ಬದಲಾವಣೆಯ ಕಾಮಗಾರಿ. | ಕಾಮಗಾರಿ ಪೂರ್ಣಗೊಂಡಿದೆ. | |
| 4 | ರಾಂಪೂರು ಜಲ ಶುದ್ಧೀಕರಣ ಘಟಕದಲ್ಲಿ 40 ಹೆಚ್.ಪಿ ಯಂತ್ರೋಪಕರಣಗಳ ನ್ನು ಅಳವಡಿಸುವ ಕಾಮಗಾರಿ. | ಕಾಮಗಾರಿ ಪೂರ್ಣಗೊಂಡಿದೆ. | |

| | | | | | | |
|---|---|---|---|---|---|---|
| | | 5 | ಕೃಷ್ಣ ಮತ್ತು ತುಂಗಭದ್ರ ಮೂಲಗಳಿಂದ ಸರಬರಾಜು ಆಗುವ ಎಲ್ಲಾ ಜಲಸಂಗ್ರಹಗಾರಗಳಿಗೆ ಫೀಡರ್ ಮೇನ್ ಅಳವಡಿಸುವ ಕಾಮಗಾರಿ-31.43 ಕಿ.ಮೀ. | 30.20 ಕಿ. ಮೀ. ಉದ್ದದ ವಿವಿದ ವ್ಯಾಸದ ಡಿ.ಐ. ಫೀಡರ್ ಕೊಳವೆ ಮಾರ್ಗವನ್ನು ಅಳವಡಿಸಲಾಗಿದೆ. | 1.23 ಕಿ. ಮೀ. ಉದ್ದದ 350 ಮೀ. ಮೀ. ವ್ಯಾಸದ ಡಿ.ಐ. ಫೀಡರ್ ಕೊಳವೆ ಮಾರ್ಗ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿದೆ | |
| | | 6 | 13 ಸಂಖ್ಯೆ ಮೇಲ್ಮಟ್ಟದ ಜಲಸಂಗ್ರಹಗಾರ ಹಾಗೂ 1 ಸಂಖ್ಯೆ ನೆಲಮಟ್ಟದ ಜಲಸಂಗ್ರಹಗಾರಗಳ ನಿರ್ಮಾಣ ಕಾಮಗಾರಿ. | 10 ಸಂಖ್ಯೆ ಮೇಲ್ಮಟ್ಟದ ಜಲಸಂಗ್ರಹಗಾರ ಹಾಗೂ 1 ಸಂಖ್ಯೆ ನೆಲಮಟ್ಟದ ಜಲಸಂಗ್ರಹಗಾರಗಳ ನಿರ್ಮಾಣ ಕಾಮಗಾರಿ ಪೂರ್ಣಗೊಂಡಿದೆ. | 03 ಮೇಲ್ಮಟ್ಟದ ಜಲಸಂಗ್ರಹಗಾರ ನಿರ್ಮಾಣದ ಕಾಮಗಾರಿ ಪ್ರಗತಿಯಲ್ಲಿದೆ. | |
| | | 7 | 22,500 ಮನೆಗಳಿಗೆ ನಳ ಸಂಪರ್ಕಗಳೊಂದಿಗೆ ಮೀಟರ್ ಜೋಡಣೆಯ ಕಾಮಗಾರಿ. | 1800 ಮನೆಗಳಿಗೆ ನಳ ಸಂಪರ್ಕ ಕಲ್ಪಿಸಲಾಗಿದೆ | ಕಾಮಗಾರಿ ಪ್ರಗತಿಯಲ್ಲಿದೆ. | |
| | | 8 | ರಾಯಚೂರು ನಗರದ 18 ಜಲಸಂಗ್ರಹಗಾರಗಳ ದುರಸ್ಥಿ ಕಾಮಗಾರಿ. | 05 ಸಂಖ್ಯೆ ಜಲ ಸಂಗ್ರಹಗಾರಗಳನ್ನು ದುರಸ್ಥಿಗೊಳಿಸಲಾಗಿದೆ. | 13 ಸಂಖ್ಯೆ ಜಲ ಸಂಗ್ರಹಗಾರಗಳ ದುರಸ್ಥಿ ಕಾಮಗಾರಿ ಪ್ರಗತಿಯಲ್ಲಿದೆ. | |
| | | ಮೇಲೆ ನಮೂದಿಸಿದ ಬಾಕಿ ಕಾಮಗಾರಿಗಳನ್ನು ಡಿಸೆಂಬರ್-2021 ರೊಳಗಾಗಿ ಪೂರ್ಣಗೊಳಿಸ ಲಾಗುವುದು. | | | | |

ಸಂಖ್ಯೆ : ನಅಇ 160 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು